## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 334

ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 03-02-2021. (ಕಂದಾಯ ಇಲಾಖೆಯಿಂದ ವರ್ಗಾವಣೆಯಾದ ಪ್ರಶ್ನೆ)

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1. | ಭೂ–ಪರಿವರ್ತನೆಯಾದ ಜಾಗವನ್ನು ನಮೂನೆ–11 ಬಿ ಮೂಲಕ ಖರೀದಿಸಿದ್ದರೂ ನಮೂನೆ–9 ಹಾಗೂ 11–ಎ ನೀಡುವುದನ್ನು ರಾಜ್ಯದಲ್ಲಿ ಸ್ಥಗಿತಗೊಳಿಸಿದ್ದು, ಇದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಕ್ರಮಬದ್ದ ಆಸ್ತಿಗಳಿಗೆ ಇ-ಸ್ವತ್ತು ತಂತ್ರಾಂಶದ ಮೂಲಕ ನಮೂನೆ–9 ಮತ್ತು 11ಎ ಯನ್ನು ಪಡೆಯಲು ಆಸ್ತಿಯ ಮಾಲೀಕರು ಆಸ್ತಿಗೆ ಸಂಬಂಧಿಸಿದ ದಾಖಲೆಗಳನ್ನು ಒದಗಿಸಿದಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ–9 ಮತ್ತು 11ಎ ವಿತರಿಸುತ್ತಾರೆ.<br><br>ಕ್ರಮಬದ್ಧವಲ್ಲದ ಆಸ್ತಿಗಳಿಗೆ ಇ–ಸ್ವತ್ತು ತಂತ್ರಾಂಶದ ಮೂಲಕ ನಮೂನೆ 11ಬಿ ಯನ್ನು ಪಡೆಯಲು ಆಸ್ತಿಯ ಮಾಲೀಕರು ಆಸ್ತಿಗೆ ಸಂಬಂಧಿಸಿದ ದಾಖಲೆಗಳನ್ನು ಒದಗಿಸಿದಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ 11ಬಿ ವಿತರಿಸುತ್ತಾರೆ.<br><br>ಕ್ರಮಬದ್ಧವಲ್ಲದ ಆಸ್ತಿಗಳಿಗೆ ಸಂಬಂಧಿಸಿದಂತೆ ನಮೂನೆ–11ಬಿ ಪಡೆದಿರುವ ಆಸ್ತಿಯ ಮಾಲೀಕರು ನಮೂನೆ–9 ಮತ್ತು 11ಎ ಯನ್ನು ಪಡೆಯಲು ಆಸ್ತಿಗೆ ಸಂಬಂಧಿಸಿದ ಭೂ ಪರಿವರ್ತನೆ ಆದೇಶ ಮತ್ತು ಸಕ್ಷಮ ಪ್ರಾಧಿಕಾರದಿಂದ ಅಂದರೆ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ನಗರಾಭಿವೃದ್ಧಿ ಪ್ರಾಧಿಕಾರ / ಯೋಜನಾ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆದ ವಿನ್ಯಾಸ ನಕ್ಷೆ (ಲೇಔಟ್ ಪ್ಲಾನ್) ಒದಗಿಸಿದಲ್ಲಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಮೂನೆ–9 ಮತ್ತು 11ಎ ವಿತರಿಸುತ್ತಾರೆ. |
| 2. | ಬಂದಿದ್ದಲ್ಲಿ, ನಿಯಮಾವಳಿಯಂತೆ ಸ್ಟ್ಯಾಂಪ್ ಶುಲ್ಕ ಇತ್ಯಾದಿಗಳನ್ನು ಭೂ–ಪರಿವರ್ತಿತ ಜಾಗವನ್ನು 11–ಬಿ ಮೂಲಕ ಖರೀದಿಸಿದವರಿಗೆ ನಮೂನೆ–9 ಹಾಗೂ 11–ಎ ನೀಡಲು ಯಾವ ಕ್ರಮ ವಹಿಸಲಾಗಿದೆ. | |
| 3. | ಇಲ್ಲವಾದಲ್ಲಿ ನಮೂನೆ–9 ಹಾಗೂ 11–ಎ ನ್ನು ನೀಡಲು ಯಾವಾಗ ಕ್ರಮ ವಹಿಸಲಾಗುವುದು? | |

ಸಂ. ಗ್ರಾಅಪ 65 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು